# ಮುಂಜಾವು

ವಾರಪತ್ರಿಕೆ.

ಸಂಪಾದಕ: ಸಿರಿಮನೆ ನಾಗರಾಜ್

'MUNJAVU' Kannada Waekly. KOPPA - CHM. ಫೋನ್: 114

5ನೇ ವರ್ಷ 29ನೇ ಸಂಚಿಕೆ ಕೊಪ್ಪ 5-4-1987 ಭಾನುವಾರ ಬೆಲೆ 50 ಪೈಸೆ




## ಹರಿಹರ ಪಾಲಿಫೈಬರ್ಸ್‌ಗೆ ಭೂಮಿ ಗುತ್ತಿಗೆಗೆ ಸುಪ್ರೀಂ ಕೋರ್ಟ್ ತಡೆ

ಖ್ಯಾತ ಸಾಹಿತಿ ಡಾ॥ ಶಿವರಾಮಕಾರಂತ ಮತ್ತಿತರರು ಸಲ್ಲಿಸಿದ್ದ ರಿಟ್ ಅರ್ಜಿಯೊಂದರ ಸಂಬಂಧ ಕರ್ನಾಟಕ ಸರ್ಕಾರ ಮತ್ತು ಬಿರ್ಲಾ ಮಾಲಿಕತ್ವದ ಹರಿಹರ ಪಾಲಿಫೈಬರ್ಸ್ ಸಂಸ್ಥೆಗೆ ದೆಹಲಿಯ ಸುಪ್ರೀಂ ಕೋರ್ಟ್ ಮಾರ್ಚ್ 24ರಂದು ನೋಟೀಸ್ ನೀಡಿ ಅರ್ಜಿ ಇತ್ಯರ್ಥವಾಗುವವರೆಗೆ ಯಥಾಸ್ಥಿತಿ ಮುಂದುವರೆಯುವಂತೆ ಆದೇಶ ನೀಡಿದೆ

ಹರಿಹರದ ಪಾಲಿಫೈಬರ್ಸ್ ಸಂಸ್ಥೆಗೆ ಮೆದು ಮರಕ್ಕಾಗಿ ಶಿವಮೊಗ್ಗ, ಚಿಕ್ಕಮಗಳೂರು ಜಿಲ್ಲೆಗಳ 76 ಗ್ರಾಮಗಳ 83,100 ಎಕರೆ ಅರಣ್ಯವನ್ನು ಸರ್ಕಾರ ಒಪ್ಪಿಸುತ್ತಿದೆ. ಇದರಿಂದಾಗಿ ಸುಮಾರು 5 ಲಕ್ಷ ಜನರ ಜೀವನೋಪಾಯಕ್ಕೆ ತೊಂದರೆಯಾಗುತ್ತದೆಂದು ರಿಟ್ ಅರ್ಜಿಯಲ್ಲಿ ವಾದಿಸಲಾಗಿತ್ತು.

ಗುತ್ತಿಗೆಗೆ ನೀಡಲಾಗಿರುವ ಭೂಮಿ ಗಂಧದ ಮರಗಳಿಂದ ಒಳಗೊಂಡಿದ್ದು, ದಟ್ಟ ಅರಣ್ಯವಾಗಿದೆ. ರಾಜ್ಯ ಸರ್ಕಾರ ಗುತ್ತಿಗೆಗೆ ನೀಡಿದಂಥ ಪಶ್ಚಿಮ ಘಟ್ಟದ ಈ ಪ್ರದೇಶ ಹಿಂದಿನಿಂದಲೂ ಗ್ರಾಮವಾಸಿಗಳ ಜೀವನದಲ್ಲಿ ಹಾಸುಹೊಕ್ಕಾಗಿ ಇದ್ದು, ಕೃಷಿಗೆ ಹಾಗೂ ಜಾನುವಾರುಗಳ ಸಾಕಾಣಿಕೆಗೆ ಸಹಕಾರಿಯಾಗಿತ್ತು.

ಎರಡು ವರ್ಷಗಳ ಹಿಂದೆ ರಾಜ್ಯ ಸರ್ಕಾರ ಶೇ 51 ಮತ್ತು ಪಾಲಿಫೈಬರ್ಸ್ ಸಂಸ್ಥೆ ಶೇ 49 ಷೇರು ಹೊಂದಿದ ಹೊಸ ಉದ್ಯಮ 'ಕರ್ನಾಟಕ ಪಲ್ಪ್‌ವುಡ್ ಲಿಮಿಟೆಡ್' ಸ್ಥಾಪಿತವಾಯಿತು. ಈ ಸಂಸ್ಥೆಯ ಉತ್ಪಾದನೆಯಲ್ಲಿ ಶೇ. 87 ಬಿರ್ಲಾ ಸಂಸ್ಥೆಗೆ ಮಾರುವಂತೆ ಒಪ್ಪಂದವೇರ್ಪಟ್ಟಿತ್ತು.

ಮೇಲಿನ ಒಪ್ಪಂದದಂತೆ ದಟ್ಟ ಪ್ರಾಕೃತಿಕ ಅರಣ್ಯವನ್ನು ಸವರಿ ನಾಶಪಡಿಸಿ, ನೀಲಗಿರಿ ಮುಂತಾದ ಮರಗಳನ್ನು ಬೆಳೆಸಲು ತೊಡಗಿದ್ದು, ಇದರಿಂದ ಪಶ್ಚಿಮ ಘಟ್ಟದ ಪರಿಸರ ಸಮತೋಲನಕ್ಕೆ ಹಾನಿ ಉಂಟಾಗುವುದಾಗಿ ಡಾ॥ ಕಾರಂತ ಹಾಗೂ ಅವರ ಸಹವರ್ತಿಗಳು ತಮ್ಮ ಅರ್ಜಿಯಲ್ಲಿ ವಾದಿಸಿದ್ದರು.

ಮುಖ್ಯ ನ್ಯಾಯಾಧೀಶ ನ್ಯಾ। ಆರ್. ಎಸ್. ಪಾಠಕ್ ಹಾಗೂ ನ್ಯಾ। ರಂಗನಾಥ ಮಿಶ್ರಾ ಅವರನ್ನೊಳಗೊಂಡ ವಿಭಾಗೀಯ ಪೀಠವು ಮೇಲಿನ ಅರ್ಜಿಯನ್ನು ವಿಚಾರಣೆಗೆ ಎತ್ತಿಕೊಂಡು, 3 ವಾರದೊಳಗೆ ಉತ್ತರಿಸುವಂತೆ ಪ್ರತಿವಾದಿಗಳಿಗೆ ನೋಟೀಸ್ ನೀಡಿದೆ.

('ತೀರ್ಥಹಳ್ಳಿ ಗ್ರಾಮಭಾರತಿ'ಯಿಂದ)

### ಅಧ್ಯಾಪಕರ ಮೇಲೆ ಕೈ ಮಾಡಿದ ಸಬ್‌ಇನ್ಸ್‌ಪೆಕ್ಟರ್ ಕ್ಷಮಾ ಯಾಚನೆ; ಸಂಧಾನ

ಹರಿಹರಪುರ: ಹಾಲ್ಮುತ್ತೂರಿನಲ್ಲಿ ಮಾ. 24ರಂದು ಹಿರಿಯ ಅಧ್ಯಾಪಕ ದೇವರ ಭಟ್ಟ ಎಂಬವರ ಮೇಲೆ ಇಲ್ಲಿನ ಸಬ್‌ಇನ್ಸ್‌ಪೆಕ್ಟರ್ ದುಗ್ಗಪ್ಪ ಅಕಾರಣವಾಗಿ ಕೈ ಮಾಡಿದ ಬಗ್ಗೆ ಸಾರ್ವಜನಿಕರು ಮತ್ತು ತಾಲ್ಲೂಕಿನ ಅಧ್ಯಾಪಕ ವೃಂದ ಸಿಟ್ಟಿಗೆದ್ದಿದ್ದು, ಅನಂತರ ಸರ್ಕಲ್ ಇನ್ಸ್‌ಪೆಕ್ಟರ್ ಕೇಶವಾನಂದ ಮತ್ತು ಸಬ್‌ಇನ್ಸ್‌ಪೆಕ್ಟರ್ ದುರ್ಗಯ್ಯ ಅವರ ಮಧ್ಯಸ್ಥಿಕೆಯಿಂದ ಸಂಧಾನ ನಡೆದು ದುಗ್ಗಪ್ಪ ಅವರು ಕ್ಷಮಾಯಾಚನೆ ಮಾಡಿದ್ದರಿಂದ ಪ್ರಕರಣ ಸೌಹಾರ್ದಯುತವಾಗಿ ಕೊನೆಗೊಂಡಿತು.

### ಬಿಳಾಲ್‌ಕೊಪ್ಪ ಜೇಸೀಸ್ ಆಶ್ರಯ : ಸಾಮೂಹಿಕ ವಿವಾಹಕ್ಕೆ ಅರ್ಜಿ ಆಹ್ವಾನ

ಬಿಳಾಲುಕೊಪ್ಪ: 'ತಾಳಿ ಭಾಗ್ಯ' ಯೋಜನೆಯ ಸರಳ ಸಾಮೂಹಿಕ ವಿವಾಹವನ್ನು ಇಲ್ಲಿನ ಮೇರುತಿ ಜೇಸೀಸ್ ಆಶ್ರಯದಲ್ಲಿ 4-5-87ನೇ ಸೋಮವಾರ ಏರ್ಪಡಿಸಲಾಗಿದೆ. ವಿವಾಹವಾಗಲು ಇಚ್ಛಿಸುವ ಅರ್ಹ ವಧೂವರರು 20-4-87ರೊಳಗಾಗಿ ತಮ್ಮ ಹೆಸರುಗಳನ್ನು ಈ ಕೆಳಕಂಡವರಲ್ಲಿ ನೋಂದಾಯಿಸಲು ಕೋರಲಾಗಿದೆ.

1) ಜಿ.ಸಿ. ಗೋಪಾಲಕೃಷ್ಣ, ಮಂಡಲ ಪಂಚಾಯಿತಿ ಸದಸ್ಯರು, ಗುಡ್ಡೇತೋಟ.

2) ಬಿ.ಎನ್. ಭಾಸ್ಕರ್, ಮಂ. ಪ. ಸದಸ್ಯರು, ಬಿಳಾಲು ಕೊಪ್ಪ.

3) ತಹಸೀಲ್ದಾರ್, ಕೊಪ್ಪ;

4) ರೆವಿನ್ಯೂ ಇನ್ಸ್‌ಪೆಕ್ಟರ್, ಜಯಪುರ.

### ಅಂಚೆ ದರ ಏರಿಕೆಗೆ ಪತ್ರಿಕೆಗಳ ಪ್ರತಿಭಟನೆ

**ಕೇಂದ್ರ ಸರ್ಕಾರ ಈ ಜನವರಿಯಿಂದ ವಾರ್ತಾ ಪತ್ರಿಕೆಗಳ ಅಂಚೆ ಶುಲ್ಕವನ್ನು ಏಕಾಏಕಿ ಮೂರು ಪಟ್ಟು ಹೆಚ್ಚಿಸಿರುವುದನ್ನು ಕಡಿಮೆ ಮಾಡಲು ಮಾಡಿಕೊಂಡ ಮನವಿಗಳೆಲ್ಲ ನಿಷ್ಫಲವಾಗಿರುವುದರಿಂದ ಇದಕ್ಕೆ ಪ್ರತಿಭಟನೆ ಸೂಚಿಸಲು ರಾಜ್ಯಸಣ್ಣ ಮತ್ತು ಜಿಲ್ಲಾ ಪತ್ರಿಕೆಗಳ ಸಂಘ ನೀಡಿರುವ ಕರೆಯ ಮೇರೆಗೆ ನಮ್ಮ 12-4-87ರ ಸಂಚಿಕೆ ಪ್ರಕಟವಾಗುವುದಿಲ್ಲ. —ಸಂ.**

## ನ.ರಾ. ಪುರ ಸ॥ ವೈದ್ಯರ ವಿರುದ್ಧ 'ನಾಗರಿಕರ' ದೂರು : ಉನ್ನತ ವೈದ್ಯಾಧಿಕಾರಿಗಳಿಂದ ವಿಚಾರಣೆ

ನ ರಾ. ಪುರ: ಇಲ್ಲಿನ ಸರ್ಕಾರಿ ಆಸ್ಪತ್ರೆಯ ಹಿರಿಯ ವೈದ್ಯಾಧಿಕಾರಿ ಡಾ॥ ಟಿ. ಎಂ. ಮಹದೇವಪ್ಪನವರ ಬಗ್ಗೆ ಸಾರ್ವಜನಿಕರು ನೀಡಿರುವರೆನ್ನಲಾದ ದೂರಿನ ಬಗ್ಗೆ ಆರೋಗ್ಯ ಇಲಾಖೆಯ ಸಹಾಯಕ ನಿರ್ದೇಶಕರ ಕಚೇರಿಯ (ಮೈಸೂರು) ಉಪನಿರ್ದೇಶಕ ಡಾ॥ ಹುಯಿಲಗೋಳ ಅವರು ಮಾ. 28ರಂದು ವಿವರವಾದ ತನಿಖೆ ನಡೆಸಿದರು. ಹಾಗೂ ಈ ಪ್ರಕರಣಕ್ಕೆ ಸಂಬಂಧಪಟ್ಟಂತೆ ಆಸ್ಪತ್ರೆಯಲ್ಲಿರುವ ದಾಖಲೆಗಳನ್ನು ಸಹ ಪರಿಶೀಲಿಸಲಾಯಿತು.

ಬಹುತೇಕ ಜನರು ಈ ವೈದ್ಯಾಧಿಕಾರಿಗಳು ಬಹಳ ನಿಷ್ಠೆ, ಸೌಜನ್ಯ ಮತ್ತು ಅಂತಃಕರಣ ಪೂರ್ವಕವಾಗಿ ಕೆಲಸ ನಿರ್ವಹಿಸುತ್ತಿದ್ದಾರೆಂದೂ, ಅವರು ಮೇಲೆ ದುರುದ್ದೇಶದಿಂದ ಮಾಡಲಾಗಿರುವ ಆಪಾದನೆಗಳ ಆಧಾರದಲ್ಲಿ ಏನೂ ಕ್ರಮ ಕೈಗೊಳ್ಳಬಾರದೆಂದೂ ಹೇಳಿದರೆ, ಕೆಲವರು ಕೆಲ ಆರೋಪಗಳನ್ನು ಪುನರುಚ್ಚರಿಸಿದರು. ಆದರೆ ಆರೋಪಗಳನ್ನು ಬರೆದ ಕಾಗದಗಳಿಗೆ ಸಹಿ ಮಾಡಿ ಕೊಡುವಂತೆ ಕೇಳಿದಾಗ ಕೆಲವರು ಹಿಂದೆಗೆದದ್ದು ಕಂಡಿತು.

ಬೇರೆ ಕಡೆಯಿಂದ ಇಲ್ಲಿಗೆ ಶಿಕ್ಷಾತ್ಮಕ ವರ್ಗಾವಣೆ ಆಗಿ ಬಂದಿರುವ ಕಾಂಪೌಂಡರೊಬ್ಬನು ವೈದ್ಯಾಧಿಕಾರಿಗಳ ಕಟ್ಟುನಿಟ್ಟಿನ ಕ್ರಮಗಳ ವಿರುದ್ಧ ಹಗೆ ತೀರಿಸಲು ನಾಗರೀಕರಿಂದ ವೈದ್ಯಾಧಿಕಾರಿಗಳ ಮೇಲೆ ದೂರು ಬರೆಸಲು ಪ್ರಯತ್ನಿಸುತ್ತಿದ್ದಾನೆನ್ನಲಾಗಿದ್ದು, ಈಚೆಗೆ ಇಂಥದೇ ಒಂದು ದೂರಿನ ಆಧಾರದ ಮೇಲೆ ಜಿಲ್ಲಾ ಪತ್ರಿಕೆಯೊಂದರಲ್ಲಿ ವೈದ್ಯಾಧಿಕಾರಿಗಳ ಬಗ್ಗೆ ಅವಹೇಳನಕಾರಿಯಾದ ವರದಿಯೊಂದು ಪ್ರಕಟವಾಗಿದನ್ನು ಈ ಬಗ್ಗೆ ನಾಗರಿಕರಲ್ಲಿ (ಮುಖ್ಯವಾಗಿ ಈ ಸರ್ಕಾರಿ ವೈದ್ಯರಿಂದ ಉತ್ತಮ ರೀತಿ ಸೇವೆ ಪಡೆದ ನೂರಾರು ಜನರಲ್ಲಿ) ತೀವ್ರ ಅಸಮಾಧಾನವುಂಟಾಗಿ, ಪತ್ರಿಕೆಯಲ್ಲಿ ಕೆಲವು ಪತ್ರಗಳೂ ಪ್ರಕಟವಾಗಿದ್ದನ್ನೂ ಸ್ಮರಿಸಬಹುದು.

ಈ ತನಿಖೆಯಿಂದಾಗಿ ಈ ಬಗೆಗಿನ ಹಗರಣ ಮತ್ತು ಅಂತೆ-ಕಂತೆ, ಊಹಾಪೋಹಗಳಿಗೆ ತೆರೆ ಬೀಳುವುದೆಂದು ನಿರೀಕ್ಷಿಸಲಾಗಿದೆ.

## ಕೊಪ್ಪ ಸ್ಟೇಟ್ ಬ್ಯಾಂಕ್ ಸಿಬ್ಬಂದಿ ವಂಚಕ ಪ್ರಕಾಶ ಹಂಡೆ ವಿರುದ್ಧ ಮೊಕದ್ದಮೆ

ಕೊಪ್ಪ: ಈಚೆಗೆ ಇಲ್ಲಿನ ಮೈಸೂರು ಬ್ಯಾಂಕಿನಲ್ಲಿ ಸಿಬ್ಬಂದಿ ಠೇವಣಿದಾರರ ಹಣ ದುರುಪಯೋಗ ಮಾಡಿಕೊಂಡಿದ್ದಾನೆನ್ನಲಾಗಿರುವ ಎಚ್. ಎಸ್. ಪ್ರಕಾಶನ (ಎಚ್. ಆರ್. ಶ್ರೀನಿವಾಸ ಹಂಡೆಯವರ ಮಗ) ವಿರುದ್ಧ ಕೊಪ್ಪ ಠಾಣೆಯಲ್ಲಿ ಸೆಕ್ಷನ್ 409ರನ್ವಯ (ನಂಬಿಕೆ ದ್ರೋಹದ) ದೂರು ದಾಖಲಾಗಿದೆ.

18,925 ರೂ. ದುರುಪಯೋಗದ ಬಗ್ಗೆ ದಾಖಲೆ ದೊರೆತಿದ್ದು, ಇನ್ನೂ ಬಹು ದೊಡ್ಡ ಪ್ರಮಾಣದ ವಂಚನೆ ನಡೆದಿರುವ ಶಂಕೆಯಿದೆಯೆಂದು ದೂರಿನಲ್ಲಿ ಹೇಳಲಾಗಿದೆ.

ಪ್ರಕಾಶ ಜಿಲ್ಲಾ ನ್ಯಾಯಾಲಯದಲ್ಲಿ ನಿರೀಕ್ಷಣಾ ಜಾಮೀನಿಗೆ ಪ್ರಯತ್ನಿಸಿದ್ದು ಇನ್ನೂ ದಸ್ತಗಿರಿಯಾಗಿಲ್ಲ (ಈ ವರದಿ ಅಚ್ಚಿಗೆ ಹೋಗುವವರೆಗೂ)

### ಕಳವು ಮಾಲು ವಶ

ಕೊಪ್ಪದ ಜೀವರಾಜ ಜೈನ್ ಎಂಬವರ ಮನೆಯಿಂದ ಬಾಡಿಗೆಗೆ ಕೊಡುವ ಸುಮಾರು 2500 ರೂ. ಬೆಲೆಯ ಅಡಿಗೆ ಪಾತ್ರೆಗಳನ್ನು ಕದ್ದಿದ್ದ ಚಂದ್ರ ಮತ್ತು ನಟರಾಜ ಎಂಬವರನ್ನು ಬಂಧಿಸಿ ಗುಜರಿಯ ದಾವೂದ್‌ಗೆ ಮಾರಿದ್ದ ಪಾತ್ರೆಗಳನ್ನು ಸಬ್ ಇನ್ಸ್‌ಪೆಕ್ಟರ್ ದುರ್ಗಯ್ಯ ವಶಪಡಿಸಿಕೊಂಡಿದ್ದು, ಆರೋಪಿಗಳನ್ನು ಜೈಲಿಗೆ ಕಳಿಸಲಾಗಿದೆ.

### ಸ್ಕೂಟರ್ ಡಿಕ್ಕಿ : ವೃದ್ಧ ಸಾವು

ಗುತ್ತಿ ದೇವಸ್ಥಾನದ ಬಳಿ ಕಿಟ್ಟ ಎಂಬವರ ಎಂವೈಜಿ 3532 ನಂಬರಿನ ಸ್ಕೂಟರ್ ಡಿಕ್ಕಿ ಹೊಡೆದಿದ್ದ ರಾಮ ದೇವಾಡಿಗ ಎಂಬ ವೃದ್ಧರು ಅನಂತರ ಆಸ್ಪತ್ರೆಯಲ್ಲಿ ಮೃತಪಟ್ಟಿದ್ದು, ಸರ್ಕಲ್ ಇನ್ಸ್‌ಪೆಕ್ಟರ್ ಕೇಶವಾನಂದ ಸ್ಕೂಟರ್ ಸವಾರನನ್ನು ಬಂಧಿಸಿ, ಕೇಸು ದಾಖಲು ಮಾಡಿಕೊಂಡು ಜಾಮೀನಿನ ಮೇಲೆ ಬಿಡುಗಡೆ ಮಾಡಿದ್ದಾರೆ.

# ಮಹಿಳಾ ಜಾಗೃತಿ

ನಮ್ಮ ಸಮಾಜದಲ್ಲಿ ಇಂದು ಹೆಣ್ಣನ್ನು ಬಹಳ ಕೀಳಾಗಿ ಕಾಣಲಾಗುತ್ತಿದೆ. ಅವಳ ವ್ಯಕ್ತಿತ್ವ, ಸಾಮರ್ಥ್ಯಗಳ ಬಗೆಗಾಗಲಿ, ಕುಟುಂಬಕ್ಕೆ ಅವಳ ಕೊಡುಗೆಯ ಬಗೆಗಾಗಲಿ ಸಮಾಜದಲ್ಲಿ, ಮುಖ್ಯವಾಗಿ ಗಂಡಸರಲ್ಲಿ ಗೌರವ ಭಾವನೆಯಿಲ್ಲ. ಹೆಣ್ಣಿನ ಬಗ್ಗೆ ಸಮಾಜ ಪೂರ್ಣ ತಾರತಮ್ಯ ಮಾಡುತ್ತಿದೆ.

ಆದರೆ ಈ ತಾರತಮ್ಯಭಾವ ನಮ್ಮ ಸಮಾಜದಲ್ಲಿ ಹಾಸುಹೊಕ್ಕಾದ ಒಂದು ನೀತಿಯೇ ಆಗಿಬಿಟ್ಟಿದೆ. ಜಾತಿಗಳ ಮೇಲುಕೀಳು, ಸಂಪತ್ತಿನ ಅಸಮಾನತೆ, ಬಣ್ಣಗಳ (ಕಪ್ಪು-ಬಿಳುಪು ಎಂಬ) ಭೇದ ಭಾವ, ಪಟ್ಟಣ ಹಳ್ಳಿಗಳ ನಡುವಿನ ಅಸಮಾನ ಅಂತಸ್ತು—ಹೀಗೆ. ಅಂದರೆ ಈ ದೋಷ ನಮ್ಮ ಸಮಾಜದ ರಚನೆಯಲ್ಲೇ ಇದೆ.

ಆದ್ದರಿಂದ 'ಮಹಿಳಾ ಜಾಗೃತಿ'ಯೆಂದರೆ ಮಹಿಳೆಯರಿಗೆ ತಮ್ಮ ವಿಶೇಷ ಸಮಸ್ಯೆಗಳ, ಆಗುಹೋಗುಗಳ ಅರಿವಿನ ಜೊತೆಗೆ, ಇಡೀ ಸಮಾಜದ ಈ ದೋಷಪೂರ್ಣ ರಚನೆ ಹಾಗೂ ಅದಕ್ಕೆ ಸಾಧ್ಯವಿರುವ ನಿವಾರಣೆಯ ಮಾರ್ಗಗಳು–ಈ ಬಗೆಗಿನ ಸಮಗ್ರ ಅರಿವೂ ಆಗುತ್ತದೆ.

ಈಚೆಗಷ್ಟೇ ಆಚರಿಸಿದ 'ಮಹಿಳಾ ದಿನ', 'ಮಹಿಳಾ ಸಪ್ತಾಹ'ಗಳ ಹಿನ್ನೆಲೆಯಲ್ಲಿ ಒಂದು ಚಿಂತನೆ ಇಲ್ಲಿದೆ.

## 'ವೇದಿಕೆ'

ನಾವೆಲ್ಲರೂ ಸುಖವಾಗಿರಬೇಕೆಂದು ಬಯಸುತ್ತೇವೆ. ನಾವೂ ನಾಲ್ಕು ಜನರ ಹಾಗೆ ಬದುಕಬೇಕು, ನಮ್ಮ ಅಭಿಪ್ರಾಯ ಇತರರು ಗೌರವಿಸಬೇಕು ಎಂದು ನಮ್ಮ ಮನಸ್ಸಿನ ಭಾವನೆ ಇರುತ್ತದೆ. ಸುಖವಾಗಿರುವುದೆಂದರೆ ದುಡಿಯದೆ ಜೀವಿಸುವುದಲ್ಲ. ದುಡಿದರೆ, ದಿನದ 24 ಗಂಟೆಯೂ "ನಾಳೆ ಹೇಗಪ್ಪ!" ಅನ್ನುವ ಚಿಂತೆ ಇಲ್ಲದೆ, 'ಇಷ್ಟು ಸೌಲಭ್ಯ ಇದ್ದರೆ ಸಾಕು, ನಿರಾತಂಕವಾಗಿ ಜೀವಿಸಬಹುದು' ಎಂದು ನಮಗೆ ಅನ್ನಿಸುವಂತಹ ಜೀವನ ನಮಗೆ ಬೇಕು. ಆದರೆ, ಇಂತಹ ಜೀವನ ನಮಗೆ ಸಿಗುತ್ತಿದೆಯೇ? ಇಲ್ಲ. ಯಾಕೆ?

ಒಂದು ಗಳಿಗೆ ನಾವು ಜೀವಿಸುತ್ತಿರುವ ಸಮಾಜದ ಕಡೆಗೆ ದೃಷ್ಟಿ ಹಾಯಿಸೋಣ. ಅಲ್ಲಿ ನಾವು ಕಾಣುತ್ತಿರುವುದೇನು? ಒಂದು ಕಡೆ ಕಡು ಶ್ರೀಮಂತರು, ಬೇಕಾದಷ್ಟು ಜಮೀನು, ಎಕ್ರೆಗಟ್ಟಲೆ ಎಸ್ಟೇಟುಗಳು — ಇನ್ನೊಂಡೆಡೆ ದುಡಿದುಣ್ಣುತ್ತೇನೆಂದರೆ ಎರಡೆಕ್ರೆ ಜಮೀನು ಇಲ್ಲದ, ನಿಲ್ಲಲು ಮನೆಯೂ ಇಲ್ಲದ, ಹೊಟ್ಟೆ ಬಟ್ಟೆಗೆ ಸರಿ ಇಲ್ಲದ ಬಡವರ ಹಿಂಡು. ನಮ್ಮ ಜಾತಿ ವ್ಯವಸ್ಥೆ ತೆಗೆದುಕೊಳ್ಳಿ : ಮೇಲ್ಜಾತಿ–ಕೀಳ್ಜಾತಿ; ಹಳ್ಳಿಯ ಜನರ ದುಡಿಮೆ ಎಲ್ಲ ಸೂರೆಗೊಳ್ಳುವ, ಎಲ್ಲ ಸೌಲಭ್ಯಗಳಿಂದ ಕೂಡಿದ ಪಟ್ಟಣಗಳು — ಎಲ್ಲ ಸೌಲಭ್ಯಗಳಿಂದ ವಂಚಿತವಾದ ಹಳ್ಳಿಗಳು. ಪಟ್ಟಣದ ಮಕ್ಕಳಿಗೆ ಬೇಕಾದಷ್ಟು ಸ್ಕೂಲುಗಳು, ಬೌದ್ಧಿಕವಾಗಿ ಬೆಳೆಯಲು ಬೇಕಾದ ಲೈಬ್ರೆರಿಗಳು, ಕಲಾಸಕ್ತಿ ಬೆಳೆಸಲು, ಚಿತ್ರ ಕಲೆ, ನೃತ್ಯ ಕಲೆ, ಸಂಗೀತ ಕಲೆ, ಹೀಗೆ ಎಲ್ಲದಕ್ಕೂ ಸುಭಿಕ್ಷ. ಆದರೆ, ಹಳ್ಳಿಯ ಮಕ್ಕಳು ಒಂದು ಪ್ರೈಮರಿ ಸ್ಕೂಲಿಗೆ ಹೋಗಲು 3–4 ಮೈಲಿ ನಡೆದು ಹೋಗಬೇಕು. ಅಲ್ಲಿಯೋ ಸ್ಕೂಲಿಗೆ ಸರಿಯಾಗಿ ಮಾಸ್ಟ್ರೇ ಇರದಂಥ ಪರಿಸ್ಥಿತಿ. ಇಂಥ ಪರಿಸ್ಥಿತಿಯಲ್ಲಿ ಬುದ್ಧಿಶಕ್ತಿ ಇದ್ದರೂ ಸೌಕರ್ಯಗಳ ಕೊರತೆಯಿಂದಾಗಿ ಹಳ್ಳಿಯ ಮಕ್ಕಳು ದಡ್ಡರಾಗದೆ ಇನ್ನೇನಾಗುತ್ತಾರೆ !

ಗಂಡು–ಹೆಣ್ಣಿನ ವಿಚಾರ ತೆಗೆದುಕೊಳ್ಳಿ. ಹೆಣ್ಣಿನ ಅಭಿಪ್ರಾಯ ಯಾವ ವಿಷಯದಲ್ಲೂ ಕೇಳುವವರೇ ಇಲ್ಲ ಜೀವನದಲ್ಲಿ ಒಂದು ಗಂಡಿಗೆ ಒಂದು ಹೆಣ್ಣು ಬೇಕೇ ಬೇಕು. ಹಾಗಿದ್ದರೂ ಮದುವೆ ಆಗಬೇಕಾದರೆ ಹೆಣ್ಣು ವರದಕ್ಷಿಣೆ ಕೊಡಲೇ ಬೇಕು. ಹೆಂಡತಿ ಸತ್ತ ಮರುದಿನವೇ ಬೇಕಾದರೆ ಗಂಡು ಬೇರೆ ಮದುವೆ ಆಗುತ್ತಾನೆ ಆದರೆ ಹೆಂಗಸು ಮದುವೆ ಆಗುವ ಹಾಗಿಲ್ಲ. ಯಾಕಿದು ಹೀಗೆ? ಅವಳೂ ಮನುಷ್ಯಳಲ್ಲವೆ?

ಇದು ನಾವು ಜೀವಿಸುತ್ತಿರುವ ಸಮಾಜ.

ಎಲ್ಲಿ ನೋಡಿದರೂ ಅಸಮಾನತೆ, ಮೇಲು-ಕೀಳು, ಭೇದ–ಭಾವ. ಇಂತಹ ತಾರತಮ್ಯಗಳಿಂದ ಕೂಡಿದ ಸಮಾಜದಲ್ಲಿ ಸುಖವೆಲ್ಲಿಂದ ಬರುತ್ತದೆ ಹೇಳಿ.

ಈ ಸಮಾಜ ಹಿಂದಿನಿಂದ ಇದ್ದುದ್ದೇ ಹೀಗೆಯೇ? ಅಲ್ಲ. ನಾವು ಚರಿತ್ರೆಯಲ್ಲಿ ಓದಿದ್ದೇವೆ. ಇಲ್ಲ, ನಮ್ಮ ಮಕ್ಕಳು ಓದುವಾಗಲಾದರೂ ಕೇಳಿದ್ದೇವೆ. ಹಿಂದೆ ಒಂದು ಕಾಲದಲ್ಲಿ— ಜನರು ಗುಂಪು ಗುಂಪಾಗಿ ಜೀವನ ನಡೆಸುತ್ತಿದ್ದಾಗ, ಜನಬಲವೇ ಆ ಗುಂಪಿನ ಬಲವಾಗಿದ್ದ ಕಾಲದಲ್ಲಿ ಸಂತತಿಯನ್ನು ಕೊಡುವ ಹೆಂಗಸಿಗೇ ಪ್ರಾಧಾನ್ಯವಿದ್ದು, ಅವಳು ಗುಂಪಿನ ಮುಂದಾಳಾಗಿರುತ್ತಿದ್ದಳು. ಆಗ ಎಲ್ಲರೂ ದುಡಿದು ಅವಶ್ಯಕತೆಗನುಸಾರವಾಗಿ ಹಂಚಿ ತಿನ್ನುವ ಪದ್ಧತಿ ಇತ್ತು.

ಆಗ ಜಾತಿಗಳೆಂಬುದೇ ಇರಲಿಲ್ಲ. ಅಲ್ಲದೆ ಸುರುವಿಗೆ ಈ ಜಾತಿ ವ್ಯವಸ್ಥೆ ಬರುವಾಗಲಾದರೂ ಅವರವರ ವೃತ್ತಿಯಿಂದಾಗಿ ಬಂತೇ ಹೊರತು ಈ ತರದ ಅಸ್ಪೃಶ್ಯತೆಯಾಗಲೀ, ಒಬ್ಬರಲ್ಲೊಬ್ಬರು ಉಣ್ಣಬಾರದು, ಮದುವೆ ಆಗಬಾರದು— ಇತ್ಯಾದಿ ನಿಷೇಧವಾಗಲಿ ಇರಲಿಲ್ಲ. ಕ್ರಮೇಣ ಇದು ಬದಲಾ

**ಹೇಮಲತಾ ಶೆಣೈ ಕೆ.**
**ಕೊಪ್ಪ**

ವಣೆಯಾಗುತ್ತಾ ಈಗ ನಾವು ಜೀವಿಸುತ್ತಿರುವ ಈ ಸಮಾಜದ ರೂಪ ತಾಳಿದೆ.

ಹೀಗೆಂದಾಗ ಇದು ಬದಲು ಮಾಡಲು ಸಾಧ್ಯವಿರುವಂತಹ ಒಂದು ವ್ಯವಸ್ಥೆ ಎನ್ನುವುದು ನಮಗೆ ವ್ಯಕ್ತವಾಗುತ್ತದೆ. ತೀರ ದೂರವೇಕೆ? ಕೆಲವು ನೂರು ವರ್ಷಗಳ ಹಿಂದೆ ಕೃಷ್ಣದೇವರಾಯನ ಕಾಲದಲ್ಲಿ ಈ ಸಮಾಜ ಎಷ್ಟು ಸಮೃದ್ಧಿಯಿಂದ ಕೂಡಿತ್ತೆಂದರೆ, ರಸ್ತೆ ಬದಿಯಲ್ಲಿ ಮುತ್ತು, ರತ್ನ, ವೈಡೂರ್ಯಗಳನ್ನು ಸೇರಿನಿಂದ ಅಳೆದು ಮಾರುತ್ತಿದ್ದರು ಎಂದು ಚರಿತ್ರೆ ಹೇಳುತ್ತದೆ. ಹಾಗಾದರೆ, ಈ ಸಮಾಜ ಇಂಥ ದುರವಸ್ಥೆಗೆ ಹೇಗೆ ಬಂತು?

ನಿಮಗೊಂದು ಉದಾಹರಣೆ ಕೊಡುತ್ತೇನೆ. ನನಗೆ ಒಂದು ಒಳ್ಳೆ ಸಂಪದ್ಭರಿತ ತೋಟವಿದೆ ಎಂದು ಇಟ್ಟುಕೊಳ್ಳಿ. ಅದಕ್ಕೆ ಕಾಲಕ್ಕೆ ಸರಿಯಾಗಿ ಗೊಬ್ಬರ ಹಾಕುವುದು, ಕಳೆ ಕೀಳುವುದು, ರೋಗ ಬಂದಾಕ್ಷಣ ಔಷಧಿ ತಕ್ಕ ಪ್ರಮಾಣದಲ್ಲಿ ಹಾಕುವುದು ಮಾಡಿ ನೋಡಿಕೊಂಡರೆ ಅದು ನಮಗೆ ಒಳ್ಳೆ ಉತ್ಪತ್ತಿ ಕೊಟ್ಟು ನಾವು ಸುಖವಾಗಿ ಬದುಕಲು ಸಾಧ್ಯವಿದೆ. ಅದೇ ನಾವು ಬೇಡವಾದ ಕೆಲಸಕ್ಕೆ ಮನ ಹಾಕಿ, ಆಲಸ್ಯ ಮಾಡಿ ತೋಟದ ಕಡೆ ಗಮನ ಕೊಡದಿದ್ದರೆ ಅದರ ಅವಸ್ಥೆ ಏನಾಗಬಹುದು ? ಅದು ಎಷ್ಟು ಫಲ ನಮಗೆ ಕೊಡಬಹುದು ? ನಮ್ಮ ಸಮಾಜವಾದರೂ ಅಷ್ಟೇತಾನೆ–ಈ ತೋಟದ ಹಾಗೆನೇ–ಯಾವುದೋ ಒಂದು ಹಂತದಲ್ಲಿ ಸುವಿಚಾರಗಳನ್ನು ಬಿಟ್ಟು ಅವಿಚಾರಗಳ ದಿಕ್ಕಿಗೆ ಮನ ಹಾಕಿ ಸಮಾಜದಲ್ಲಿ ಕಳೆ, ರೋಗಗಳೇ ತುಂಬಿದ್ದಾವೆ. ಇದು ಈಗ ನಾವು ಬದುಕುತ್ತಿರುವ ಸಮಾಜ.

ಇವೇನು ಗುಣವಾಗದ ರೋಗಗಳೇನಲ್ಲ.

(3ನೇ ಪುಟಕ್ಕೆ)

## ಮಕ್ಕಳ ಅಂಕಣ

ಪ್ರೀತಿಯ ಮಕ್ಕಳೆ,

ಮಕ್ಕಳ ಅಂಕಣಕ್ಕೆ ಬಿ. ವಿ. ರಶ್ಮಿ, 5ನೇ ತರಗತಿ, ಹರಿಹರಪುರ, ಎ. ಆರ್. ರಂಜನಿ, 4ನೇ ತರಗತಿ, ಶೃಂಗೇರಿ ಮತ್ತು ಸಿ.ಎಸ್. ಪಲ್ಲವಿ, 4ನೇ ತರಗತಿ. ಉತ್ತಮೇಶ್ವರ— ಈ ಮೂವರು ಮಕ್ಕಳು ಹೆಸರು ಸೂಚಿಸಿದ್ದಾರೆ. ಈ ಪೈಕಿ ರಶ್ಮಿ ಸೂಚಿಸಿರುವ "ಚಿನಾರಿ ಕೂಟ" ಎಂಬ ಹೆಸರನ್ನು ಇಟ್ಟುಕೊಳ್ಳೋಣವ?

ಈ ಮೂವರಿಗೂ ಮಕ್ಕಳ ಚಿತ್ರಕಥೆಯ ಪುಸ್ತಕಗಳ ಬಹುಮಾನ ಉಂಟು. ಹಾಗೆಯೇ, ಮೊಟ್ಟ ಮೊದಲ ಮಕ್ಕಳ ಅಂಕಣದಲ್ಲಿ ಪ್ರಕಟವಾದ "ನನ್ನ ಆಸೆ" ಎಂಬ ಕವನ ರಚಿಸಿರುವ ಹರಿಹರಪುರದ ಎಚ್. ವಿ. ಸಂದೇಶನಿಗೂ ಬಹುಮಾನ ಕೊಡಲಾಗುವುದು.

ನಿಮಗೆಲ್ಲ ಈಗ ಪರೀಕ್ಷೆಯ ಗಡಿಬಿಡಿಯೇನೋ?. ಕೆಲವರಿಗೆ ಮುಗಿದಿರಬಹುದು. ಇನ್ನು ಸ್ವಲ್ಪ ಬಿಡುವು ಸಿಗುತ್ತಲ್ಲ, ಆಗ ಅಂದೆ ನಿಮ್ಮ ಅಜ್ಜ–ಅಜ್ಜಿಯೋ, ಅಪ್ಪ–ಅಮ್ಮನೋ ನಿಮಗೆ ಹೇಳುತ್ತಿದ್ದ ಮಕ್ಕಳ ಕತೆ, ಮಕ್ಕಳ ಪದ್ಯ ಮುಂತಾದುವನ್ನು ಬರೆದು ಕಳಿಸಿ. ಹಾಗೆಯೇ ನೀವೇ ಹೊಸದಾಗಿ ಕೂಡ ಬರೆಯಬಹುದು ಚುಟುಕ, ಒಗಟು, ಮುಂತಾದುವನ್ನು ಸಹ ಬರೆಯಬಹುದು. ನೀವು ಬರೆದುದರಲ್ಲಿ ತಪ್ಪಿದ್ದರೆ ಯಾರೂ ನಿಮ್ಮನ್ನು ಹೀಯಾಳಿಸುವುದಿಲ್ಲ. ನಿರ್ಭಯವಾಗಿ, ಬರೆಯಬೇಕೆನ್ನಿಸಿದ್ದನ್ನು ಬರೆಯಿರಿ. ಆದರೆ ಬರೆದುದೆಲ್ಲವೂ ಪ್ರಕಟವಾಗಲೇಬೇಕೆಂದು ಇಲ್ಲವಾದ್ದರಿಂದ ಹಾಗಾಗದಲ್ಲಿ ನಿರಾಶರಾಗಬೇಡಿ. ಇನ್ನೂ ಉತ್ತಮವಾದುದನ್ನು ಬರೆಯಲು ಪ್ರಯತ್ನಿಸಿ.

ನೆನಪಿಡಿ: ಬರೆಯಬೇಕೆಂಬ ಆಸೆಯೊಂದೇ ಇದ್ದರೆ ಸಾಲದು. ಒಂದು ಬರೆಯಬೇಕಾದರೆ ಹತ್ತು ಓದಿ ತಿಳಿದಿರಬೇಕಾಗುತ್ತದೆ. (ಹಾಗೆಂತ ಮೂರು ಹೊತ್ತೂ ಅದನ್ನೇ ಹಚ್ಚಿಕೊಂಡು ನಿಮ್ಮ ಶಾಲಾ ವಿದ್ಯಾಭ್ಯಾಸವನ್ನು ಹಿಂದಾಗಿಸಿಕೊಳ್ಳಲೂ ಬೇಡಿ !)

ಇನ್ನು ಮೇ 3ನೇ ತಾರೀಖಿನ ಅಂಕಣದಲ್ಲಿ ಮತ್ತೆ ಭೇಟಿ ಮಾಡೋಣವ?

ನಿಮ್ಮ ಪ್ರೀತಿಯ,
**ಸಿರಿಮನೆ ನಾಗರಾಜ್.**

### ಕಥೆ

## ಕಳವು

ಒಂದೂರಿನಲ್ಲಿ ತಿಮ್ಮ, ರಂಗಿ ಎಂಬ ಬಡವರಿದ್ದರು. ಅವರಿಗೆ ಸೀತಾ ಎಂಬ ಮಗಳಿದ್ದಳು. ಅವಳು ಶಾಲೆಗೆ ಹೋಗುತ್ತಿದ್ದಳು. ಅವಳಿಗೆ ಓದುವುದರಲ್ಲಿ ತುಂಬ ಆಸಕ್ತಿಯಿತ್ತು ಆದರೆ ಆದಕ್ಕೆ ಸರಿಯಾಗಿ ಅವಳ ತಂದೆಗೆ ಪೆನ್ನು, ಪುಸ್ತಕ, ಎಕ್ಸರ್‌ಸೈಜ್ ಇನ್ನೂ ಮುಂತಾದ ಸಾಮಗ್ರಿಗಳನ್ನು ತಂದುಕೊಡಲು ಹಣವಿರಲಿಲ್ಲ. ಏಕೆಂದರೆ ಅವರು ಕೂಲಿ ಕೆಲಸ ಮಾಡುತ್ತಿದ್ದರು.

ಸೀತಳಿಗೆ ಶಾಲೆಯಲ್ಲಿನ ಇತರ ಹುಡುಗಿಯರ ಒಳ್ಳೊಳ್ಳೆಯ ವಸ್ತುಗಳನ್ನು ನೋಡಿದಾಗ ಆಸೆಯಾಗುತ್ತಿತ್ತು. ಆದರೆ ಕೊಂಡುಕೊಳ್ಳಲು ಹಣವಿರಲಿಲ್ಲ ಒಂದು ಸಾರಿ ಅವಳ ಪೆನ್ನು ಕಳೆದುಹೋಯಿತು. ಆಗ ಶಾಲೆಯ ಗೆಳತಿಯೊಬ್ಬಳ ಒಳ್ಳೆಯ ಪೆನ್ನನ್ನು ನೋಡಿ ಆಸೆಯಾಯಿತು ಅವಳಿಗೆ ಪೆನ್ನಿನ ಅಗತ್ಯವೂ ಇತ್ತು. ಸೀತಾ ಗೆಳತಿಯ ಆ ಪೆನ್ನನ್ನು ಕದ್ದು ತಂದಳು.

ನಂತರ ಅವಳಿಗೇ ಹೀಗೆ ಮಾಡಿದೆನಲ್ಲಾ ಎಂದು ಬೇಸರವಾಯಿತು. ಆಗ ಅವಳು ಗೆಳತಿಯ ಮನೆಗೆ ಹೋಗಿ "ಪೆನ್ನು ಕದ್ದದ್ದು ತಪ್ಪಾಯಿತು" ಎಂದು ಹೇಳಿ ಕ್ಷಮೆ ಕೋರಿದಳು. ಅವಳ ಗೆಳತಿಗೆ ಇವಳನ್ನು ಕಂಡು ಕನಿಕರವೆನಿಸಿತು. "ಆ ಪೆನ್ನು ನೀನೇ ಇಟ್ಟುಕೋ" ಎಂದು ಹೇಳಿದಳು.

ಸೀತಾ ಮನೆಗೆ ಬಂದಳು. ತಾಯಿಯೊಡನೆ ಈ ಘಟನೆಯನ್ನು ಹೇಳಿದಳು. ಆಗ ತಾಯಿ "ಇನ್ನು ಮುಂದೆ ಹಾಗೆ ಮಾಡಬೇಡ. ಇನ್ನೊಬ್ಬರ ವಸ್ತುವನ್ನು ತೆಗೆಯಬೇಡ" ಎಂದು ಸಂತೈಸಿ ಬುದ್ಧಿ ಹೇಳಿದಳು.

—ಸಿ. ಎಸ್. ಪಲ್ಲವಿ,
4ನೇ ತರಗತಿ, ಉತ್ತಮೇಶ್ವರ ಶಾಲೆ

## ಬಾರಯ್ಯ ಮಳೆಗಾರ

ಬಾರಯ್ಯ ಮಳೆಗಾರ
ರೈತರ ಗೆಣೆಕಾರ
ಮಾಡುವೆ ನಿನಗೆ ಉಪಚಾರ
ಏನು ಮಾಡುವೆ ವಿಚಾರ ?
ನೀನಿಲ್ಲದಿರುವುದೇ ಊರಲ್ಲಿ ಸಮಾಚಾರ
ಬೇಗ ಮಾಡು ಉಪಕಾರ
ನೀ ಬಂದರೆ ನಮ್ಮ ಸಮಸ್ಯೆ ಪರಿಹಾರ
ಹಾಕುವೆ ನಿನಗೆ ಹೂವಿನ ಹಾರ
ಸುರಿಸಯ್ಯ ನಿನ್ನ ದೇಹದ ಭಾರ
ಮಾಡುವರು ನಿನಗೆ ಪೂಜೆ ಪುನಸ್ಕಾರ
ಸಾಲದೆ ನಿನಗೆ ಈ ಸತ್ಕಾರ ?
ಕೇಳಲಿಲ್ಲವೆ ಜನರ ಚೀತ್ಕಾರ ?

—ಎಡಗೆರೆ ರಾಧಾಕೃಷ್ಣ
ಕಮಲಾಪುರ–ಸಂಸೂರು

(2ನೇ ಪುಟದಿಂದ)

ಅದಕ್ಕೆ ತಕ್ಕ ಔಷಧಿ ಮಾಡಬೇಕು, ಕಳೆಯೆಲ್ಲ ಕಿತ್ತು ಹಸನು ಮಾಡಬೇಕು ಅಷ್ಟೆ. ಇದನ್ನು ಯಾರು ಮಾಡಬೇಕು? ಯಾರಿಗೆ -ಈ ಸಮಾಜ ಸರಿಯಿಲ್ಲ, ನಾವು ಇಲ್ಲಿ ಅಸುಖಿಗಳು. ನಾವೆಲ್ಲರೂ ಒಟ್ಟಿಗೆ ಸುಖನಾಗಿ ಬದುಕಬೇಕು-ಅನ್ನುವುದಿದೆಯೊ ಅವರು ಈ ಜವಾಬ್ದಾರಿ ಹೊರಬೇಕಾಗುತ್ತದೆ. ಇದು ಕಷ್ಟದ ಕೆಲಸ ಇರಬಹುದು. ಆದರೆ ಅಸಾಧ್ಯದ ಕೆಲಸ ಅಲ್ಲ. ಮತ್ತು ಹಾಗೆ ಈ ಸಮಾಜವನ್ನು ಹಸನು ಮಾಡದೆ ಎಲ್ಲರಿಗೂ ಸುಖ, ನೆಮ್ಮದಿ ದೊರೆಯುವುದು ಸಾಧ್ಯವಿಲ್ಲ.

ನಾವು ಮಹಿಳೆಯರು ಹೀಗೆ ನಾವು ಬದುಕುತ್ತಿರುವ ಸಮಾಜದ ಬಗ್ಗೆ, ನಮ್ಮ ದೇಶದ ಆಗುಹೋಗುಗಳ ಬಗ್ಗೆ, ಈ ಸಮಾಜದಲ್ಲಿ ಹೆಂಗಸರ ಸ್ಥಾನ ಮಾನದ ಬಗ್ಗೆ ತಿಳುವಳಿಕೆ ಪಡೆಯುವುದೇ ನಿಜವಾಗಿ "ಮಹಿಳಾ ಜಾಗೃತಿ" ಎನಿಸಿಕೊಳ್ಳುತ್ತದೆ. ಹೀಗೆ ಜಾಗೃತಿಗೊಂಡ ಮನಸ್ಸು ವಿನೋಚನೆ ದಿಕ್ಕಿಗೆ ಹೋಗಿಯೇ ಹೋಗುತ್ತದೆ. ಎಂದರೆ ಇಂತಹ ಅಸಮಾನತೆಯಿಂದ ಕೂಡಿದ ವ್ಯವಸ್ಥೆಯಿಂದ ಬಿಡುಗಡೆ ಹೊಂದುವ ದಿಕ್ಕಿಗೆ ಹೆಜ್ಜೆ ಹಾಕುವುದು.

ದೇಶದ ಆಗು ಹೋಗು ಏನು ಬಂತು! ನಮ್ಮ ಮನೆಯ ಆಗು ಹೋಗುಗಳ ಬಗ್ಗೆನೇ ಯೋಚಿಸಲು ನಮಗೆ ಬರುವುದಿಲ್ಲ, ಯೋಚಿಸಿದರೂ ನಮ್ಮ ಅಭಿಪ್ರಾಯ ಗೌರವಿಸುವವರು ಬೇಕಲ್ಲ! ಹಾಗೆಂದರೆ, ನಮಗೇನಾದರೂ ಬುದ್ಧಿ ಶಕ್ತಿ ಕಮ್ಮಿ ಇದೆಯೆ? ಇಲ್ಲ. ಮೊಟ್ಟ ಮೊದಲಿಗೆ ಗಣಿತ ಶಾಸ್ತ್ರ ಬರೆದವಳು ಒಬ್ಬ ಹೆಂಗಸು. ಝಾನ್ಸಿರಾಣಿ ಲಕ್ಷ್ಮೀಬಾಯಿ, ಕಿತ್ತೂರು ಚೆನ್ನಮ್ಮ, ಯಾಕೆ ಮೊನ್ನೆ ಮೊನ್ನೆ ನಮ್ಮ ಪ್ರಧಾನ ಮಂತ್ರಿಯಾಗಿದ್ದ ಇಂದಿರಾ ಗಾಂಧಿ ಇವರೆಲ್ಲ ಯಾರಿಗೆ ಕಮ್ಮಿ ಇದ್ದರು ಹೇಳಿ?

# ಮಹಿಳಾ ಜಾಗೃತಿ

ದೊಡ್ಡ ದೊಡ್ಡ ಮಹಾನುಭಾವರಾದ ಶಿವಾಜಿ ಮಹಾರಾಜ, ಸ್ವಾಮಿ ವಿವೇಕಾನಂದರು, ಗಾಂಧೀಜಿ ಮುಂತಾದವರೆಲ್ಲ ತಮ್ಮ ತಾಯಿಯ ವ್ಯಕ್ತಿತ್ವದಿಂದಾಗಿಯೇ ಉನ್ನತ ವ್ಯಕ್ತಿತ್ವ ಬೆಳೆಸಿ ಕೊಂಡವರು (ತಂದೆಯ ಪಾಲು ಏನೂ ಇರಲಿಲ್ಲವೆಂದಲ್ಲ) ಇವರೆಲ್ಲ ಜಾಗೃತ ಮಹಿಳೆಯರಾಗಿದ್ದರು ನಾವು-ತಾಯಂದಿರು ಜಾಗ್ರತರಾದರೆ, ಈವಾಗ ಕೂಡ ಇಂತಹ ಸುಸಂತಾನಕ್ಕೇನೂ ಕಮ್ಮಿ ಇರಲಾರದು.

ಹಾಗಾದರೆ ಈ ನಿಟ್ಟಿನಲ್ಲಿ ನಮ್ಮ ತಾಯಂದಿರ ಸಾಮಾಜಿಕ ಜವಾಬ್ದಾರಿ ಮತ್ತು ಮನೋಭಾವದ ಕಡೆಗೆ ಸ್ವಲ್ಪ ಗಮನ ಕೊಡೋಣ. ನಾವೇ ತಾಯಂದಿರು ನಮ್ಮ ಗಂಡು ಮತ್ತು ಹೆಣ್ಣು ಮಕ್ಕಳನ್ನು ಸಮಾನವಾಗಿ ಬೆಳೆಸುತ್ತೇವೆಯೇ? ಗಂಡು ಮಗುವನ್ನು 'ಆಡಿಕೊಳ್ಳಲಿ' ಎಂದು ಬಿಡುತ್ತೇವೆ. ಆದರೆ ಹೆಣ್ಣು ಮಗುಗೆ 'ಬಾ, ಅಡುಗೆ ಮನೇಲಿ ಸಹಾಯ ಮಾಡು' ಎನ್ನುತ್ತೇವೆ. ಎಲ್ಲಿಯಾದರೂ ಹೋದ ಹೆಣ್ಣು ಮಗು ಸ್ವಲ್ಪ ವಿಳಂಬವಾದರೂ ಚಡಪಡಿಸುತ್ತೇವೆ, ಬಂದ ಮೇಲೆ ಜೋರು ಮಾಡುತ್ತೇವೆ. ಆದರೆ, ಗಂಡು ಹುಡುಗ ಬರಲು ತಡವಾದರೆ, ಎಲ್ಲಿಯಾದರೂ ಆಡುತ್ತಿರಬಹುದು ಎಂದು ಯೋಚಿಸುತ್ತೇವೆ. ಹುಡುಗರು ಹುಡುಗಿಯನ್ನು ಚುಡಾಯಿಸಿದಾಗ ಸುತ್ತಮುತ್ತಲಿನವರ, ಸಮಾಜದ ದೃಷ್ಟಿಯಲ್ಲಿ ಅವಳೇ 'ಅಪರಾಧಿ'ಯಾಗುತ್ತಾಳೆ.

ವಿದ್ಯಾಭ್ಯಾಸದ ಮಟ್ಟಿಗಾದರೂ ಅಷ್ಟೆ. ಹುಡುಗನಾದರೆ, ಓದಲಿ. ಹುಡುಗಿಯಾದರೆ, "ಓದಿದ್ದು ಸಾಕು. ಇನ್ನು ಮದುವೆ ಆಗುವವಳು, ಮನೆಯಲ್ಲಿರು...." ನಾವ್ಯಾಕೆ ಹೀಗೆ? ಈ ಪ್ರಶ್ನೆ ನಮಗೆ ನಾವೇ ಹಾಕಿಕೊಂಡು ವಿವೇಚಿಸಬೇಕು.

ಜೀವನಕ್ಕೆ ಒಂದು ಗಂಡಿಗೆ ಒಂದು ಹೆಣ್ಣಿನ ಸಂಗಾತಿತನ ಬೇಕೇ ಬೇಕು. ಆದರೂ ಹೆಣ್ಣು ವರದಕ್ಷಿಣೆ ಕೊಟ್ಟು ಅದನ್ನು ಪಡೆಯಬೇಕು ಮತ್ತು ಮದುವೆಗಾಗಿ ಕಾಯುತ್ತಾ ಕುಳಿತಿರಬೇಕು ಯಾಕಿದು ಹೀಗೆ? ಇದಕ್ಕೆ ಕಾರಣ ಹೆಣ್ಣಿನ ದುಡಿಮೆಗೆ ಬೆಲೆ ಇಲ್ಲದಿರುವುದೇ ಆಗಿದೆ. ಗಂಡಿನ ಹಾಗೆ ಹೆಣ್ಣು ಆರ್ಥಿಕವಾಗಿ ತನ್ನ ಮನೆಗೆ ಆಸ್ತಿಯಾಗಬಲ್ಲಳಾದರೆ (Asset) ಈ ಪರಿಸ್ಥಿತಿ ತಪ್ಪುತ್ತದೆ. ಆದರೆ ಸದ್ಯದ ಪರಿಸ್ಥಿತಿಯಲ್ಲಿ ಅವಳು ತಾನಿರುವ ಮನೆಗೆ 'ಹೊರೆ' ಎನ್ನಿಸಿಕೊಂಡಿರ್ತಾಳೆ (Liability). ಅವಳು ಮದುವೆಗೆ ಮೊದಲು ತಂದೆ ತಾಯಿಗೆ, ಮದುವೆಯ ಅನಂತರ ಗಂಡನ ಮನೆಗೆ ಹೊರೆಯಾಗದೆ ಆರ್ಥಿಕವಾಗಿ ಸಹಾಯಕಳಾಗಬಲ್ಲಳಾದರೆ ಹಾಗೂ ಸಮಾಜ ಕೂಡ ಇದನ್ನು ಅರ್ಥಮಾಡಿ ಕೊಳ್ಳಬಲ್ಲುದಾದರೆ ಅವಳು ಕೂಡಾ ವರದಕ್ಷಿಣೆ ಕೊಡಬೇಕಾದ ಮತ್ತು ಮದುವೆಗಾಗಿ ಕಾಯುತ್ತಾ ಕುಳಿತುಕೊಳ್ಳುವ ಪ್ರಸಂಗ ತಪ್ಪಬಹುದು.

ಹೆಣ್ಣು ಮಕ್ಕಳು ಈ ನಿಟ್ಟಿನಲ್ಲಿ ಹೋಗಲು ನಮ್ಮ ತಾಯಂದಿರ ಮನೋಭಾವ ಮೊದಲು ಬದಲಾಗಬೇಕು. ಹೆಣ್ಣು ಮಕ್ಕಳಿಗೆ ಚಿಕ್ಕಂದಿನಿಂದ ತಾನು ಕೀಳು ಎಂಬ ಭಾವನೆ ಬೆಳೆಸುವುದನ್ನು ಬಿಡಬೇಕು ಅಲ್ಲದೆ ವಿದ್ಯಾಭ್ಯಾಸದಲ್ಲಿ ಮುಂದುವರೆದು ಹೋಗಿ ತಮ್ಮ ಸ್ವಂತ ವ್ಯಕ್ತಿತ್ವವನ್ನು ಬೆಳೆಸಿ ಕೊಳ್ಳಲು ಇರುವ ಅವಕಾಶಗಳಿಗೆ ತಡೆಹಾಕಬಾರದು. ಹೆಣ್ಣು ಮಕ್ಕಳು ಕೂಡ ಸ್ವಂತ ವ್ಯಕ್ತಿತ್ವ ಬೆಳೆಸಿ, ದುಡಿಮೆ ಮಾಡಿ (ಕೆಲಸಕ್ಕೆ ಸೇರಿ ಅಥವ ಯಾವುದಾದರೂ ಸ್ವಯಂ ಉದ್ಯೋಗ ಮಾಡಿ) ತನ್ನ ಕಾಲಮೇಲೆ ತಾನು ನಿಲ್ಲಬಲ್ಲೆ ಎನ್ನುವಂತಹ ವ್ಯಕ್ತಿಗಳಾಗಬೇಕು. ಇಂತಹವರು ತಾವಿರುವ ಮನೆಗೆ ಆಸರೆಯಾಗಬಲ್ಲರು, ಹೊರೆಯಲ್ಲ

ಸಂಸಾರವನ್ನು ಎರಡೆತ್ತಿನ ಬಂಡಿಗೆ ಹೋಲಿಸಬಹುದು. ಸಂಸಾರ ಸುಸೂತ್ರವಾಗಿಯೂ, ವೇಗವಾಗಿ ಅಭಿವೃದ್ಧಿಯ ದಿಕ್ಕಿನಲ್ಲಿಯೂ ಹೋಗಬೇಕೆಂದರೆ, ಇಬ್ಬರೂ ಸರಿಸಮವಾಗಿ ಒಮ್ಮನಸ್ಸಿಂದ ಸಾಗಬೇಕಲ್ಲವೆ? ಆದರೆ, ಈಗ ಪರಿಸ್ಥಿತಿ ಹಾಗಿದೆಯೆ? ಬಹುಶಃ ಗಾಡಿಯನ್ನು ಇನ್ನೊಂದು ಎತ್ತನ್ನು ಒಂದೇ ಎತ್ತು ಎಳೆಕೊಂಡು ಹೋಗುವ ಪರಿಸ್ಥಿತಿ ಇದೆ.

(ಇದೇ ಹೋಲಿಕೆ ನಮ್ಮ ಸಮಾಜಕ್ಕೂ ಅನ್ವಯಿಸುತ್ತದೆ ಸಮಾಜದಲ್ಲಿ ಎಲ್ಲರೂ ಸಾಕಷ್ಟು ಸ್ವಾವಲಂಬಿಗಳಾಗಿದ್ದರೆ ತಾವಾಗಿಯೇ ಅಭಿವೃದ್ಧಿಯತ್ತ ಸಾಗುತ್ತಾರೆ. ಆಗ ದೇಶ ತಾನೇ ತಾನಾಗಿ ಮತ್ತು ಸುಲಲಿತವಾಗಿ ಅಭಿವೃದ್ಧಿ ಹೊಂದುತ್ತದೆ. ಆದರೆ ಸಮಾಜದ ಯಾವುದೇ ಒಂದು ದೊಡ್ಡ ಭಾಗ-ಅಂದರೆ ಸಮಾಜದ ಅರ್ಧ ಭಾಗವೇ ಆಗಿರುವ ಹೆಣ್ಣು ಕುಲ ಇರಬಹುದು, ಅಥವಾ ದೇಶದ ಮುಕ್ಕಾಲಂಶದಷ್ಟಾಗುವ ಶ್ರಮಜೀವಿಗಳು ಮತ್ತು ರೈತ ಸಮುದಾಯವಿರಬಹುದು, ಅಥವಾ ಕಾರ್ಖಾನೆಗಳ ಕಾರ್ಮಿಕ ವರ್ಗವಿರಬಹುದು-ಹೀಗೆ ಈ ಒಂದು ದೊಡ್ಡ ಭಾಗಕ್ಕೆ ಯಾವುದೇ ರೀತಿಯ ಸ್ವಂತಿಕೆ, ಸ್ವಾವಲಂಬನೆ, ಸ್ವಯಂ ಅಭಿವೃದ್ಧಿಯ ಚೈತನ್ಯ ಅಥವಾ ಸ್ವಯಂ ನಿರ್ಧಾರದ ಅವಕಾಶ-ಇತ್ಯಾದಿಗಳಿಲ್ಲದೆ, ಸಮಾಜದ ಆ ಭಾಗವೇ ಪಾರ್ಶ್ವವಾಯು ಪೀಡಿತವಾದಂತೆ ಪರಾವಲಂಬಿಯಾಗಿ, ಕೆಲವೇ ಜನ ಇಡೀ ದೇಶದ ಹೊರೆಯನ್ನು (ಜೊತೆಗೆ ಸಂಪತ್ತನ್ನೂ ಸಹ) ಹೊಂದಿದ್ದರೆ ಆ ದೇಶ ಮೇಲೆ ಹೇಳಿದ ಬಂಡಿಯಂತೆ ಕುಂಟದೆ, ಮುಗ್ಗರಿಸದೆ ಇರಲು ಸಾಧ್ಯವೆ?)

ನಮ್ಮ ಸ್ತ್ರೀಯರು ಸ್ವಂತ ವ್ಯಕ್ತಿತ್ವ ಮತ್ತು ಆರ್ಥಿಕ ಸ್ವಾತಂತ್ರ್ಯ ಬೆಳೆಸಿಕೊಂಡರೆ ಗಂಡನಿಗೆ ಪ್ರತಿಯೊಂದು ಯೋಚನೆಯಲ್ಲಿಯೂ ಕಾರ್ಯದಲ್ಲಿಯೂ ಪೂರಕಳಾಗಿರಲು ಸಾಧ್ಯವಿದೆ. ಮಹಿಳೆಯರು ಈ ತರಹ ಬೆಳೆಯಬೇಕೆಂದರೆ, ಪುರುಷರು (ತಂದೆಯಾದವ, ಗಂಡನಾದವ) ಇದರ ಅವಶ್ಯಕತೆ ಮನಗಂಡು ಸಹಕರಿಸುವ ಅವಶ್ಯಕತೆಯೂ ಇದೆ.

## ಓದುಗರ ಪತ್ರ

# "ಕಿಸಾನ್ ನರ್ಸರಿ ಟಾಟಾ, ಬಿರ್ಲಾಗಳಿಗಲ್ಲ"

ಮಾನ್ಯರೆ,

ದಿನಾಂಕ 15.3.87ರ 'ಮುಂಜಾವು' ಪತ್ರಿಕೆಯಲ್ಲಿ ಪ್ರಕಟವಾದ ಬಿ. ಎಂ. ರಘುನಾಥ್‌ರವರ ಪತ್ರದಲ್ಲಿ ಅವರು "ಕಿಸಾನ್ ನರ್ಸರಿ ನೆಪದಲ್ಲಿ ಟಾಟಾ, ಬಿರ್ಲಾರಂತಹವರ ಕೈಗಾರಿಕೆಗೆ ಬೇಕಾಗುವ ಶೀಘ್ರ ಬೆಳೆವ ಮರಗಳನ್ನು ಈಗ ರೈತರಿಂದಲೇ ಬೆಳೆಸಿ ರೈತರನ್ನು ಒಡೆದು ಆಳುವ ನೀತಿಯನ್ನು ಸರಕಾರ ಅನುಸರಿಸುತ್ತಿದೆ" ಎಂದಿದ್ದಾರೆ. ಆದರೆ ವಸ್ತುತಃ ಈ ಪ್ರದೇಶದಲ್ಲಿ ಬಿರ್ಲಾ, ಟಾಟಾಗಳವರಿಗೆ ಬೇಕಾಗುವ ಶೀಘ್ರ ಬೆಳೆಯುವ ಮರಗಳನ್ನು ಬೆಳೆಸುತ್ತಿಲ್ಲ. ಬದಲಾಗಿ ರೈತರಿಗೇ ಬೇಕಾಗುವ ಕಟ್ಟಿಗೆ ಮರಗಳಾದ ಅಕೇಸಿಯ, ಸರ್ವೆ, ಗೊಬ್ಬರಕ್ಕೆ ಬೇಕಾಗುವ ಹೊಂಗೆ, ರೈನ್ ಟ್ರೀ, ಬಳಂಜಿ, ಇತ್ಯಾದಿಗಳನ್ನೂ, ಜಾನುವಾರು ಮೇವಿಗೆ ಅಗತ್ಯವಾಗುವಂತಹ ಸುಬಾಬುಲ್, ಹಾಲುವಾಣಗಳನ್ನು, ರೈತರು ತಮ್ಮ ಜಮೀನಿನ ಬದುಗಳಲ್ಲಿ ಬೆಳೆದು ಲಾಭ ಗಳಿಸಿ ಮಣ್ಣಿನ ಪೋಷಕಾಂಶವನ್ನು (ಸಾಯಿಲ್ ಫರ್ಟಿಲಿಟಿ) ಸಹ ಹೆಚ್ಚಿಸಿಕೊಳ್ಳಲು ಅನುಕೂಲವಾಗುವಂತಹ ಮರಗಳಾದ ಸಿಲ್ವರ್, ಬಿಲ್ವಾರ, ಬೀಟೆ, ಹೊನ್ನೆ, ಶ್ರೀಗಂಧ, ಸೀಮೆತಂಗಡಿ, ಪೆಲ್ಟೋಫಾರಂ, ಅರಣ್ಯೋತ್ಪನ್ನಗಳನ್ನು ನೀಡುವಂತಹ ವೃಕ್ಷಗಳಾದ ಅಂಟುವಾಳ, ಹಲಸು, ಮಾವು, ಸೀಗೆ, ಹುಣಸೆ, ಗೇರು ಇತ್ಯಾದಿಗಳಲ್ಲದೆ ರೈತರು ಇಷ್ಟಪಡುವ ಯಾವುದೇ ಜಾತಿಯ ಸಸಿಗಳನ್ನು ಕಿಸಾನ್ ನರ್ಸರಿಯಲ್ಲಿ ರೈತರಿಂದ ಮತ್ತು ಆಸಕ್ತಿಯುಳ್ಳ ಕೃಷಿ ಕಾರ್ಮಿಕರಿಂದ ಬೆಳೆಸಿ ಅಪೇಕ್ಷೆ ಪಡುವ ರೈತರಿಗೆ ಉಚಿತವಾಗಿ ತಲಾ 750 ಸಸಿಗಳನ್ನು ನೀಡುತ್ತಿದ್ದೇವೆ ಮತ್ತು ಹೆಚ್ಚು ಸಸಿಗಳು ಅಗತ್ಯವಿದ್ದಲ್ಲಿ ರಿಯಾಯಿತಿ ದರದಲ್ಲಿ ಮಾರುತ್ತಿದ್ದೇವೆ.

ಈ ಮೇಲ್ಕಂಡ ಯಾವುದೇ ಜಾತಿಯ ಮರಗಳು ಟಾಟಾ, ಬಿರ್ಲಾಗಳಿಗೆ ಖಂಡಿತ ಅಲ್ಲ. ಇವನ್ನು ನಿಸರ್ಗ ಸಮತೋಲನ, ಬರಗಾಲ ತಡೆಯುವಿಕೆ, ಭೂ ಸಾರ ಸಂರಕ್ಷಣೆ ಮತ್ತು ರೈತ, ರೈತ ಕಾರ್ಮಿಕರ ಅಗತ್ಯಗಳಿಗಾಗಿಯೇ ಬೆಳೆಸಲಾಗುತ್ತಿದೆ. ಈ ಕಿಸಾನ್ ನರ್ಸರಿ ರೈತರಿಂದಲೇ, ರೈತರಿಗಾಗಿಯೇ ಇರುವುದರಿಂದ ಇದರಲ್ಲಿ 'ಒಡೆದು ಆಳುವ ನೀತಿ' ಇಲ್ಲ.

ಕಿಸಾನ್ ನರ್ಸರಿ ಬೆಳೆಸುತ್ತಿರುವ ರೈತ ಕಾರ್ಮಿಕರು ಮತ್ತು ರೈತರಿಗೆ ಅಗತ್ಯವಿದ್ದಲ್ಲಿ ಸರ್ಕಾರದಿಂದ ನೇರವಾಗಿ ಬ್ಯಾಂಕ್ ಮುಖಾಂತರ ಹಣ ಪಾವತಿ ಮಾಡುತ್ತಿರುವುದರಿಂದ ಇಲ್ಲಿ ಯಾವ ಭ್ರಷ್ಟಾಚಾರವೂ ಇಲ್ಲ ಎಂದು ದೃಢಪಡಿಸುತ್ತೇನೆ.

—ಎಚ್. ಗೋಪಾಲ್ ಸಿಂಗ್,
ವಲಯ ಅರಣ್ಯಾಧಿಕಾರಿ, ಕೊಪ್ಪ.

# ಕೊಪ್ಪ ನೀರು ಪೂರೈಕೆಗೆ 23 ಲಕ್ಷ ಮಂಜೂರು

ಕೊಪ್ಪ: ಇಲ್ಲಿನ ನೀರು ಪೂರೈಕೆಗಾಗಿ ಈಗಿರುವ 50 ಸಾವಿರ ಗ್ಯಾಲನ್ ತೊಟ್ಟಿಯ ಜೊತೆಗೆ ಇನ್ನೂ 1 ಲಕ್ಷ ಗ್ಯಾಲನ್ನಿನ ಒಂದು ತೊಟ್ಟಿ, ನೀರು ಸೋಸುವ ವ್ಯವಸ್ಥೆ, ಪೈಪುಗಳ ಬದಲಾವಣೆ, ಹರಿಹರಪುರ ಹೊಳೆಯಲ್ಲಿ 60 ಅಶ್ವಶಕ್ತಿಯ ಒಂದು ಟರ್ಬೈನ್ ಪಂಪ್‌ಸೆಟ್, 40 ಅಶ್ವಶಕ್ತಿಯ ಸಬ್‌ಮರ್ಸಿಬಲ್ ಪಂಪ್‌ಸೆಟ್ ಇತ್ಯಾದಿಗಳ ಅಳವಡಿಕೆಯ ಸಮಗ್ರ ಯೋಜನೆಗೆ 23 ಲಕ್ಷ ರೂ. ಮಂಜೂರಾಗಿರುವುದಾಗಿ ಇನ್‌ಚಾರ್ಜ್ ಮುಖ್ಯಾಧಿಕಾರಿ ಗುಂಡಾಚಾರ್ ತಿಳಿಸಿದ್ದಾರೆ ಆದರೆ ಈ ಹಣ ಕೂಡ ಸಾಲದಾಗಿದ್ದು, ಇನ್ನೂ ಹೆಚ್ಚಿನ ಮಂಜೂರಾತಿಗಾಗಿ ಕೇಳಲಾಗಿದೆಯೆಂದಿರುವ ಅವರು, ಸಂಬಂಧಪಟ್ಟ ಅಧಿಕಾರಿಗಳು ಸ್ಥಳ ಪರಿಶೀಲನೆ ನಡೆಸಿದ್ದು, ಕೆಲಸ ಆರಂಭವಾಗುವುದು ಬರುವ ಮಳೆಗಾಲದ ನಂತರವೇ ಆಗಬಹುದೆಂದಿದ್ದಾರೆ

ಇತ್ತ, ಕೊಪ್ಪದ ಹಿರೀಕೆರೆಯ ನೀರನ್ನು ಫೆಬ್ರವರಿ 18ರಿಂದಲೇ ನಿಲ್ಲಿಸಿ ಹರಿಹರಪುರದ ಹೊಳೆ ನೀರನ್ನು ಮಾತ್ರ ಸರಬರಾಜು ಮಾಡಲಾಗುತ್ತಿದೆಯೆಂದು ಅವರು ತಿಳಿಸಿದ್ದರೂ, ಪೈಪುಗಳಲ್ಲಿ ಈಗಾಗಲೇ ಮೆತ್ತಿಕೂತಿರಬಹುದಾದ ಬಗ್ಗಡದಿಂದಾಗಿಯೋ ಏನೋ–ನಲ್ಲಿಯ ನೀರು ದಿನ ದಿನಕ್ಕೆ ಹೆಚ್ಚು ಹೆಚ್ಚು ನಾತ ಬರುವುದು ಮಾತ್ರ; ಮತ್ತೂ ಹೆಚ್ಚುತ್ತಲೇ ಇದೆ.

ಜಿಲ್ಲಾ ಪರಿಷತ್ತು ಕಾರ್ಯಾರಂಭ ಮಾಡಿದ ಮೇಲಾದರೂ ಇಲ್ಲಿಗೆ ಸ್ವಚ್ಛವಾದ ಕುಡಿವ ನೀರಿನ ಪೂರೈಕೆಗೆ ವ್ಯವಸ್ಥೆಯಾಗುವುದೋ ಅಥವಾ ಕಾಲರಾದಂಥದ್ದೇನಾದರೂ ತನ್ನ ಪಾಲು ಬಲಿ ಕೊಂಡ ಮೇಲೆಯೇ ಪರಿಹಾರವೋ ಎಂದು ಜನ ಆತಂಕ ಪಡುತ್ತಿದ್ದಾರೆ.

## ವಲಯ ಅರಣ್ಯ ಅಧಿಕಾರಿಗಳ ಕಛೇರಿ

**ಕೊಪ್ಪ ವಲಯ, ಕೊಪ್ಪ**

### —: ಪ್ರ ಕ ಟ ಣೆ :—

ಈ ಮೂಲಕ ಸಮಸ್ತ ಸಾರ್ವಜನಿಕರಿಗೆ ತಿಳಿಸುವುದೇನೆಂದರೆ—

ಅರಣ್ಯ ಸಂಪತ್ತು ದಿನೇ ದಿನೇ ಹಲವಾರು ಕಾರಣಗಳಿಂದಾಗಿ ಕ್ಷೀಣಿಸುತ್ತಿದೆ. ಅರಣ್ಯ ಸಂಪತ್ತು ಕ್ಷೀಣಿಸಲು ಕಾಡಿನ ಬೆಂಕಿಯು ಒಂದು ಪ್ರಧಾನ ಕಾರಣ. ಕಾಡಿನ ಬೆಂಕಿಯಿಂದಾಗ, ಬೆಳವಣಿಗೆಯಲ್ಲಿರುವ ಲಕ್ಷೋಪಲಕ್ಷ ಪುಟ್ಟ ಗಿಡಗಳು ಕಮರಿ ಹೋಗುವುದರೊಂದಿಗೆ ಬೆಲೆ ಬಾಳುವ ಒಣಗಿದ ಮರಗಳು ಸುಟ್ಟು ಹೋಗುತ್ತವೆ. ಅಲ್ಲದೆ ಕಾಡುಪ್ರಾಣಿಗಳು ಬೆಂಕಿಗೆ ಆಹುತಿಯಾಗುತ್ತವೆ ಮತ್ತು ಅವುಗಳ ಸಂತತಿ ಕ್ಷೀಣಿಸುತ್ತದೆ. ಕಾಡಿನಲ್ಲಿ ದೊರೆಯುವ ಹಲವು ಬಗೆಯ ಬೀಜಗಳು, ಜೇನು, ಸೊಪ್ಪು. ಗಿಡಮೂಲಿಕೆಗಳೆಲ್ಲ ನಶಿಸಿ ಹೋಗುತ್ತವೆ.

ಈ ರೀತಿಯ ನಾಶವನ್ನು ಮುಂದುವರಿಯಲು ಬಿಟ್ಟಲ್ಲಿ ಅರಣ್ಯ ಸಂಪತ್ತನ್ನು ಉಳಿಸುವುದು ಮತ್ತು ಬೆಳೆಸುವುದು ಕಷ್ಟವಾಗುತ್ತದೆ. ಇದರೊಂದಿಗೆ ನಾವು ಕೂಡ ವಿನಾಶದತ್ತ ಸಾಗಬೇಕಾಗುತ್ತದೆ. ಎಲ್ಲೆಡೆಯೂ ಹಬ್ಬಿರುವ ಅರಣ್ಯವನ್ನು ಸರ್ಕಾರದ ಕಾರ್ಯಕ್ರಮಗಳಿಂದಲೇ ನಾಶದ ದವಡೆಯಿಂದ ತಪ್ಪಿಸಲು ಸಾಧ್ಯವಾಗದು. ಇದಕ್ಕೆ ನಾಡಿನ ಎಲ್ಲಾ ಜನರು ಕಾಡಿನ ಬಗ್ಗೆ ಚಿಂತಿಸಿ ತಮ್ಮ ಸುತ್ತಮುತ್ತಲಿನ ಅರಣ್ಯ ಕಾಡ್ಗಿಚ್ಚಿಗೆ ಬಲಿಯಾಗದಂತೆ ನೋಡಿಕೊಂಡಲ್ಲಿ ಅರಣ್ಯವನ್ನು ಉಳಿಸಲು ಸಾಧ್ಯ, ಬೆಳೆಸಲೂ ಸಾಧ್ಯ.

ಆದುದರಿಂದ ಸಾರ್ವಜನಿಕರಲ್ಲಿ ವಿನಂತಿಸುವುದೇನೆಂದರೆ, ಯಾವ ಕಾರಣಕ್ಕೂ ಕಾಡಿಗೆ ಬೆಂಕಿಯನ್ನು ಹಚ್ಚಬೇಡಿ. ಕಾಡಿನ ಬೆಂಕಿ ಕಂಡಲ್ಲಿ ಅದನ್ನು ಆರಿಸಲು ಸ್ವಪ್ರೇರಣೆಯಿಂದ ಮುಂದಾಗಿ, ಆಗುವ ನಾಶವನ್ನು ತಪ್ಪಿಸಿ. ಬೆಂಕಿ ದೊಡ್ಡ ಪ್ರಮಾಣದಲ್ಲಿದ್ದರೆ ಹತ್ತಿರದ ಅರಣ್ಯ ಸಿಬ್ಬಂದಿಗಳಿಗೆ ತಿಳಿಸಿ, ಅಂತಹ ಅನಾಹುತವನ್ನು ತಪ್ಪಿಸಲು ಸಹಕರಿಸಿ.

ಕಾಫಿ ಬೆಳೆಗಾರರು ತಮ್ಮ ತೋಟಗಳ ಪಕ್ಕದ ಅರಣ್ಯ ಜಮೀನಿಗೆ ಬೆಂಕಿಯನ್ನು ಹಚ್ಚಬೇಡಿರಿ. ಲೋಕೋಪಯೋಗಿ ಇಲಾಖೆಯ ರಸ್ತೆ ಕಾರ್ಮಿಕರು ರಸ್ತೆ ಕೆಲಸ ನಡೆಯುವಾಗ ಬೆಂಕಿ ರಸ್ತೆಯ ಪಕ್ಕದ ಅರಣ್ಯಕ್ಕೆ ತಗಲದಂತೆ ನೋಡಿಕೊಳ್ಳಿ.

**ಈ ವಿಚಾರದಲ್ಲಿ ಈಗಾಗಲೇ ಸಾಕಷ್ಟು ಪ್ರಚಾರ ನಡೆಸಿದ್ದಾಗ್ಯೂ ಅರಣ್ಯಗಳಲ್ಲಿ ವ್ಯಾಪಕವಾಗಿ ಬೆಂಕಿ ಕಾಣಿಸಿಕೊಂಡಿದೆ. ಇದು ತಮಗೇ ಆಗುವ ನಷ್ಟ ಎಂಬುದನ್ನು ಮನಗಂಡು, ಮುಂದಾದರೂ ಸಾರ್ವಜನಿಕರು ಕಾಡಿನ ಬೆಂಕಿ ತಡೆಗಟ್ಟುವಲ್ಲಿ ಹೆಚ್ಚು ಹೆಚ್ಚು ಆಸಕ್ತಿ ವಹಿಸಬೇಕಾಗಿದೆ.**

ತಮ್ಮ ಗ್ರಾಮದ ವ್ಯಾಪ್ತಿಯಲ್ಲಿ ಬೇಸಿಗೆ ಪೂರ್ತಿ ಕಾಡಿಗೆ ಬೆಂಕಿ ಬೀಳದಂತೆ ಕಾಳಜಿ ವಹಿಸುವ ಗ್ರಾಮದವರಿಗೆ ಇಲಾಖೆಯಿಂದ ವಿಶೇಷವಾಗಿ ಬಹುಮಾನವನ್ನು ಸಹ ಕೊಡುವ ಯೋಜನೆಯಿದೆ. ಈ ಮೂಲಕ ಆ ಗ್ರಾಮಸ್ಥರನ್ನು ದೇಶ ಗೌರವಿಸುತ್ತದೆ.

ಅರಣ್ಯ ಸಂಪತ್ತು ಪ್ರತಿ ವರ್ಷ ಕಾಡ್ಗಿಚ್ಚಿನಿಂದ ನಾಶವಾಗುವುದನ್ನು
ತಡೆಗಟ್ಟಲು ನಿಮ್ಮ ಕೈಲಾದ ಎಲ್ಲಾ ಸಹಕಾರ ನೀಡಿರಿ

"ಕಾಡಿಗೆ ಬಿದ್ದ ಬೆಂಕಿ ನಮ್ಮಗಳ ಮನೆಗೆ ಬಿದ್ದ ಬೆಂಕಿ"
"ನಾಡಿನ ಉಳಿವಿಗಾಗಿ ಕಾಡನ್ನು ರಕ್ಷಿಸಿರಿ"

**ವಲಯ ಅರಣ್ಯ ಸಿಬ್ಬಂದಿ, ಕೊಪ್ಪ.**

---

**ಟೆಲಿವಿಷನ್, ಟೂ-ಇನ್-ಒನ್, ಟೇಪ್ ರೆಕಾರ್ಡರ್ ಮುಂತಾದ ಎಲ್ಲ ಬಗೆಯ ಸಾಧನಗಳಿಗೂ ಮೂಲಭೂತ ತಂತ್ರಜ್ಞಾನವೆಂದರೆ**

## ರೇಡಿಯೋ ಇಂಜಿನಿಯರಿಂಗ್!

**ದಿನಕ್ಕೆ ಕೇವಲ 1 ಗಂಟೆಯಂತೆ**
**ಕೇವಲ 10 ತಿಂಗಳಲ್ಲಿ**

## ರೇಡಿಯೋ ಇಂಜಿನಿಯರಿಂಗ್

**ಕಲಿಯುವ ಸುವರ್ಣಾವಕಾಶ ಇಲ್ಲಿದೆ!**

ಕರ್ನಾಟಕ
ಕೈಗಾರಿಕೆಯ ಶಿಕ್ಷಣ ಸಂಸ್ಥೆ
**ಮುಖ್ಯ ರಸ್ತೆ, ಕೊಪ್ಪ**

---

## ತೆಂಗಿನ ಸಸಿಗಳು ದೊರೆಯುತ್ತವೆ

ಮಲೆನಾಡಿಗೆ ಯೋಗ್ಯವಾದ ಬಯಲುಸೀಮೆಯ ಉತ್ತಮ ತಳಿ ತೆಂಗಿನ ಸಸಿಗಳನ್ನು ತರಿಸಿಕೊಡಲಾಗುತ್ತದೆ. ಅಪೇಕ್ಷೆಯುಳ್ಳವರು ಈ ಕೆಳಕಂಡ ವಿಳಾಸಕ್ಕೆ ಭೇಟಿ ಕೊಡಿ.

**ಆರ್. ರೇವಣಸಿದ್ಧಪ್ಪ,**
ಕೊಪ್ಪ ಕಾಯಿ ಮಾರ್ಕೆಟ್
ಕೊನೇ ಅಂಗಡಿ–ಅಥವಾ
**ಕೆ. ಚಂದ್ರಶೇಖರ ಜೋಯಿಸ್,**
ಕೊಂಡಿಬೈಲು–ಉತ್ತಮೇಶ್ವರ.

---

## ಶಿವಮೊಗ್ಗ ಅಡಿಕೆ ಧಾರಣೆ

**ತಾ|| 3.4.1987**

ಸರಕು : 3080 – 3650
ಬೆಟ್ಟೆ : 1829 – 2131
ಗೊರಬಲು : 700 – 1009

**ಸಾಗರ ಅಡಿಕೆ ತಾ|| 1.4.87**

ಇಡಿ ಅಡಿಕೆ ರೂ. 1669–1812
ಆಪಿ ರೂ. 3289–3669
ಚಾಲಿ 1209–1468
ಸಿಪ್ಪೆ ಗೋಟು ರೂ. 509–709
ಮೆಣಸು ರೂ. 4836–5235

**ಸಕಲೇಶಪುರ ಏಲಕ್ಕಿ ಧಾರಣೆ**

| ತಾರೀಕು | ಗರಿಷ್ಠ | ಸರಾಸರಿ |
|---|---|---|
| 23.3.87 | 175 | 87 |
| 24.3.87 | 209 | 117 |
| 25.3.87 | 149 | 106 |
| 26.3.87 | 105 | 104 |
| 28.3.87 | 226 | 113 |

## ಕೃತಜ್ಞತೆಗಳು

ಮಲೆನಾಡಿನಲ್ಲಿ ನನ್ನ 20 ವರ್ಷಗಳ ಉಪಾಧ್ಯಾಯ ವೃತ್ತಿ ಹಾಗೂ ವಾಸ್ತವ್ಯದಲ್ಲಿ ನನಗೆ ಅಕ್ಕರೆ–ಆದರಗಳನ್ನು ನೀಡಿದ ಎಲ್ಲ ಆತ್ಮೀಯರಿಗೂ ನಾನು ನನ್ನ ಸ್ವಂತ ಊರಾದ ಸೊಲ್ಲಾಪುರದಲ್ಲಿ ಪುನಃ ನೆಲೆಸಲು ಹಿಂದಿರುಗಿ ಹೋಗುತ್ತಿರುವ ಈ ಸಂದರ್ಭದಲ್ಲಿ ಅತ್ಯಂತ ಕೃತಜ್ಞತೆಯ ಪ್ರಣಾಮಗಳನ್ನು ಸಲ್ಲಿಸುತ್ತಿದ್ದೇನೆ.

**—ಎಸ್. ಗಂಗಾಧರಯ್ಯ,**
ನಿವೃತ್ತ ಅಧ್ಯಾಪಕರು,
ಹಾಲ್ಮುತ್ತೂರು.

---




ಶೃಂಗೇರಿ ಜೇಸೀಸ್ ಸಹಾಯಾರ್ಥ

**ರಾಜ್ಯ ಪ್ರಶಸ್ತಿ ವಿಜೇತ, 'ನಟ ರತ್ನಾಕರ'**

## ಮಾಸ್ಟರ್ ಹಿರಣ್ಣಯ್ಯನವರ ನಾಟಕಗಳು

**ಸ್ಥಳ: ಸ|| ಹಿರಿಯ ಪ್ರಾಥಮಿಕ ಶಾಲೆ, ಶೃಂಗೇರಿಯ ಬಯಲು ರಂಗ ಮಂದಿರ**
**ಪ್ರತಿದಿನ ರಾತ್ರಿ 10 ಘಂಟೆಗೆ.**

8-4-87 ಬುಧವಾರ ಲಂಚಾವತಾರ
9-4-87 ಗುರುವಾರ ಮಕ್ಮಲ್ ಟೋಪಿ
10-4-87 ಶುಕ್ರವಾರ ನಡುಬೀದಿ ನಾರಾಯಣ
11-4-87 ಶನಿವಾರ "
12-4-87 ಭಾನುವಾರ ಲಂಚಾವತಾರ

ದರ: ರೂ. 15, ರೂ. 10, ರೂ. 5

ಸರ್ವರೂ ಪ್ರೋತ್ಸಾಹಿಸಬೇಕಾಗಿ ವಿನಂತಿ.

**ಸೂತ್ರಧಾರರು: ನಟ ರತ್ನಾಕರ ಮಾಸ್ಟರ್ ಹಿರಣ್ಣಯ್ಯ**

ವ್ಯವಸ್ಥಾಪಕರು: ಶೃಂಗೇರಿ ಜೇಸೀಸ್, ಶೃಂಗೇರಿ.

ಸಂಪಾದಕ, ಮುದ್ರಕ ಮತ್ತು ಪ್ರಕಾಶಕ: ಸಿರಿಮನೆ ನಾಗರಾಜ್, ಅಚ್ಚು: ದೀವಟಿಗೆ ಅಚ್ಚು ಕೂಟ, ಕೊಪ್ಪ.